ಗಣಕೀಕರಣ ಶಾಖೆ R3
U/s
09/3/2020

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 428 (563)
ಸದಸ್ಯರ ಹೆಸರು : ಶ್ರೀ ಡಾ: ವೈ.ಎ.ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ)
ಉತ್ತರಿಸುವ ದಿನಾಂಕ : 09.03.2020
ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಪದವಿ ಕಾಲೇಜುಗಳ ಪ್ರಾಧ್ಯಾಪಕರಿಂದ ಹಿಡಿದು ಇತರೆ ಎಲ್ಲಾ ನೌಕರ ವರ್ಗದವರಿಗೆ ಕಳೆದ ಒಂದು ವರ್ಷದಿಂದ ತಿಂಗಳಿಗೆ ಸರಿಯಾಗಿ ವೇತನ ಬಟವಾಡೆ ಆಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದರೆ, ಇದಕ್ಕೆ ಕಾರಣಗಳೇನು; | ಅಕ್ಟೋಬರ್-2019 ರಿಂದ ವೇತನವನ್ನು ಖಜಾನೆ-2 ಸೆಳೆಯಲು ನಿರ್ದೇಶನ ನೀಡಲಾಗಿರುತ್ತದೆ. ಇದರಿಂದಾಗಿ ಪ್ರಾರಂಭದ ಹಂತದಲ್ಲಿ ವೇತನ ಪಾವತಿಸಲು ತಾಂತ್ರಿಕ ತೊಂದರೆಯುಂಟಾಗಿರುತ್ತದೆ ಮತ್ತು 2016ರ ಪರಿಷ್ಕೃತ ಯುಜಿಸಿ ವೇತನ ಜಾರಿಯಾದ ಹಲವಾರು ಸಿಬ್ಬಂದಿಗಳ ವೇತನ ನಿಗದೀಕರಣವು ತಾಂತ್ರಿಕ ತೊಂದರೆಯಿಂದಾಗಿ ಅಕ್ಟೋಬರ್ & ನವೆಂಬರ್-2019ರ ಮಾಹೆಯ ವೇತನ ಪಾವತಿಯಲ್ಲಿ ತಡವಾಗಿರುತ್ತದೆ. ಪ್ರಸ್ತುತ ಸಾಲಿನಲ್ಲಿ 2016ರ ಪರಿಷ್ಕೃತ ವೇತನ ಶ್ರೇಣಿ ಜಾರಿಯಿಂದಾಗಿ ಹೆಚ್ಚುವರಿ ಅನುದಾನದ ಅವಶ್ಯಕತೆ ಉಂಟಾಗಿದ್ದು, ಈ ಸಂಬಂಧ ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ/317/ಬಿಆರ್‌ಎಸ್/2019, ದಿ:02.03.2020ರ ಆದೇಶದಲ್ಲಿ ಹೆಚ್ಚುವರಿಯಾಗಿ ರೂ.15122.31 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದ್ದು, ಈ ಮೊತ್ತದಲ್ಲಿ ಜನವರಿ-2020 ಮತ್ತು ಫೆಬ್ರವರಿ-2020ರ ಮಾಹೆಯ ವೇತನವನ್ನು ಕ್ಲೇಮು ಮಾಡಲು ಎಲ್ಲಾ ಪ್ರಾಂಶುಪಾಲರುಗಳಿಗೆ ಸೂಚನೆ ನೀಡಲಾಗಿದೆ. |
| ಆ | ಪ್ರತಿ ತಿಂಗಳು 5ನೇ ತಾರೀಕಿನ ಒಳಗೆ ವೇತನ ಬಟವಾಡೆ ಮಾಡಲು ಇರುವ ತೊಂದರೆ ಏನು; | ಎಲ್ಲಾ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಪ್ರಾಂಶುಪಾಲರುಗಳು ಹಣ ಸೆಳೆಯುವ ಅಧಿಕಾರಿಗಳಾಗಿದ್ದು (Drawing & Disbursing Officer) ಆಯಾ ಕಾಲೇಜಿನ ಸಿಬ್ಬಂದಿಗಳ ವೇತನವನ್ನು ಪ್ರಾಂಶುಪಾಲರುಗಳೇ ಹೆಚ್‌ಆರ್‌ಎಂಎಸ್‌ನಲ್ಲಿ ವೇತನವನ್ನು ಸೆಳೆಯಬಹುದಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಪ್ರತಿ ತಿಂಗಳು 5ನೇ ತಾರೀಖಿನೊಳಗಾಗಿ ವೇತನವನ್ನು ಬಟವಾಡೆ ಮಾಡಲು ಸಾಧ್ಯವಾಗಿರುತ್ತದೆ. ಹೆಚ್‌ಆರ್‌ಎಂಎಸ್‌ನಲ್ಲಿ ಯಾವುದೇ ತಾಂತ್ರಿಕ ತೊಂದರೆಯಿದ್ದಲ್ಲಿ ಮಾತ್ರ ವೇತನ ಬಟವಾಡೆಯಲ್ಲಿ ವಿಳಂಬವಾಗುತ್ತದೆ. |

| | | |
|---|---|---|
| ಇ | ಈ ತೊಂದರೆ ನಿವಾರಣೆಗೆ ಶಾಶ್ವತ ಪರಿಹಾರವೇನು? | ಪ್ರಸ್ತುತ ಸಾಲಿನಲ್ಲಿ ವೇತನವನ್ನು ಖಜಾನೆ-1ರ ಬದ /ಗೆ ಖಜಾನೆ-2ರಲ್ಲಿ ಸೆಳೆಯುವ ಪ್ರಕ್ರಿಯೆಯನ್ನು ಅನುಷ್ಠಾನಗೊಳಿಸಿದ್ದರಿಂದ ತಡವಾಗಿದ್ದು, ಈ ರೀತಿಯ ಹೊಸ ಯೋಜನೆಯ ಅನುಷ್ಟಾನದಿಂದ ಮತ್ತು ಪರಿಷ್ಕೃತ ವೇತನ ಶ್ರೇಣಿಯ ಅನುಷ್ಠಾನದಿಂದ ವೇತನ ನಿಗಧೀಕರಣದ ನಂತರ ಯಾವುದೇ ತಾಂತ್ರಿಕ ತೊಂದರೆಯುಂಟಾದಾಗ ಮಾತ್ರ ವೇತನ ಪಾವತಿಯಲ್ಲಿ ವಿಳಂಬವಾಗುತ್ತದೆ. ಈ ರೀತಿಯ ಅನಿವಾರ್ಯ ತೊಂದರೆಗಳನ್ನು ನಿವಾರಿಸಲು ಸ್ವಲ್ಪ ಕಾಲಾವಕಾಶದ ಅವಶ್ಯಕತೆ ಇರುತ್ತದೆ. ತುರ್ತು ಕ್ರಮಕೈಗೊಳ್ಳುವುದರ ಮೂಲಕ ಈ ರೀತಿಯ ತೊಂದರೆಗಳನ್ನು ಅಲ್ಪಾವಧಿಯಲ್ಲಿ ಪರಿಹರಿಸಲಾಗುತ್ತಿದೆ. |

(ಡಾ॥ ಅಶ್ವಥ್ ನಾರಾಯಣ ಸಿ.ಎನ್.)
ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ
ಉನ್ನತ ಶಿಕ್ಷಣ ಸಚಿವರು

**ಇಡಿ 28 ಹೆಚ್‌ಪಿಸಿ 2020**